# ಏಕಪಾತ್ರಾಭಿನಯಗಳು,

---

## ಮಲ್ಲಿಗೇ ಚಪ್ಪರ

ಮತ್ತು

## ಲಾಯರ ಪ್ರಯಾಣ

---

ಲೇಖಕರು

ಶ್ರೀ 'ಕ್ಷೀರಸಾಗರ'

ಪ್ರಕಾಶಕರು

ಸತ್ಯಶೋಧನ ಪ್ರಕಟನ ಮಂದಿರ,

ಕೋಟೆ, ಬೆಂಗಳೂರು ನಗರ.

೧೯೪೬

ಒಂದು ಪಾತ್ರ, ಒಂದು ಸೀನ್ ಮತ್ತು ಸುಮಾರು ೨೦ ನಿಮಿಷ ವ್ಯಾಪ್ತಿ ಉಳ್ಳ ಈ ಪುಟ್ಟ ನಾಟಕಗಳು ಸ್ವತಂತ್ರವಾಗಿಯಾಗಲಿ, ಅಥವಾ ಎರಡು ನಾಟಕಗಳ ನಡುವೆ ಆಗಲಿ, ಪ್ರದರ್ಶಿಸುವುದಕ್ಕೆ ಅನುಕೂಲವಾಗಿವೆ.

ಪ್ರಥಮ ಮುದ್ರಣ ೧,೦೦೦

ಬೆಲೆ ಆರಾಣೆ

ಈ ನಾಟಕವು ಮೈಸೂರು ಆಕಾಶವಾಣಿಯ ೪-೧೧-೧೯೪೪ ನೆಯ ಪ್ರಸಾರದಲ್ಲಿ ಬಂದಿದೆ.

## ಕಥಾಸಾರಾಂಶ

ಈ ಪ್ರಹಸನದಲ್ಲಿ, ಕಲ್ಲಿಗೆ
ಬೀಳದ ಮಾವಿನಕಾಯಿ
ಮಂತ್ರಕ್ಕೆ ಬೀಳುತ್ತದೆ.

---

# ಸಿದ್ಧತೆ

## ಪಾತ್ರವಿವರ

**ವಸಂತರಾಯ :** ಗಂಡುಧ್ವನಿಯನ್ನೂ ಹೆಣ್ಣುಧ್ವನಿಯನ್ನೂ ಸಹ ಅನುಕರಿಸಬಲ್ಲ ಯುವಕ. [ ಜರತಾರಿ ಕಚ್ಚೆಪಂಚೆ, ಸಿಲ್ಕ್ ಷರ್ಟ್, ಕೈಗಡಿಯಾರ, ಶಲ್ಯ, ಛತ್ರಿ. ಮೀಸೆ ಇಲ್ಲ. ]

## ಸ್ಥಳ

ವಸಂತರಾಯನ ಮನೆಯ ಮುಂಭಾಗ. ಅದರ ನಕ್ಷೆ ಹೀಗಿದೆ:-




ಅ : ಬೀದಿಯ ಪ್ರವೇಶ.

ಇ : ವಸಂತರಾಯನ ಮನೆಯ ತಲೆಬಾಗಿಲು. ಪ್ರಾರಂಭದಲ್ಲಿ ಕದ ಮುಚ್ಚಿದ್ದು, ಹಿತ್ತಾಳೆಯ ದೊಡ್ಡ ಚಿಲಕ ಕಾಣಿಸುತ್ತಿದೆ.

ಕ, ಚ : ಕಟ್ಟೆಗಳು.

ಯ, ರ : ಸ್ಥಳಸಂಕೇತಗಳು.

ಈ ನಾಟಕದಲ್ಲಿ ಅಲ್ಲಲ್ಲಿ ಕೊಟ್ಟಿರುವ ಅಕ್ಷರ ಸಂಕೇತಗಳು ಈ ನಕ್ಷೆಗೆ ಅನ್ವಯಿಸುತ್ತವೆ.

## ಕಾಲ

ಚೈತ್ರದ ಹುಣ್ಣಿಮೆ. ಅರ್ಧರಾತ್ರಿ.

# ಮಲ್ಲಿಗೇ ಚಪ್ಪರ

[ ತೆರೆ ಏಳುವುದು ]

## ವಸಂತರಾಯ

[ ವಸಂತರಾಯನು ಅರ್ಧಮಡಿಸಿದ ಬಲಗೈಮೇಲೆ, ಮುಚ್ಚಿದ ಛತ್ರಿಯನ್ನು ತಗುಲುಹಾಕಿಕೊಂಡು, ಹಿಂದುಮುಂದಾಗಿ ಪ್ರವೇಶಿಸಿ (ಅ), ಎರಡು ಹೆಜ್ಜೆಯಿಟ್ಟು ನಿಂತು, (ಅ) ಬಳಿ, ತೆರೆಯಲ್ಲಿ, ಆನಂದರಾಯನು ನಿಂತಿರುವಂತೆ ಭಾವಿಸಿ, ]

ನಿಲ್ಲೋಣಾಗ್ಲಿ ಆನಂದರಾಯ್ರೇ, .... ಬೆಳದಿಂಗ್ಳಲ್ಲಿ ಮಾತಾಡಿ ಕೊಂತಾ ಭಾಳಾ ದೂರ ಬಂಧಾಗಾಯ್ತು. ನನ್ನನ್ನೇನೋ ನಮ್ಮ ಮನೇವರೆಗೆ ಕರಕೊಂಡು ಬಂದು ಬಿಟ್ಟಿದ್ದೀರಿ. ಇಲ್ಲಿಂದ ತಮ್ಮ ಮನೆಗೆ ವಾಪ್ಸು ಹೋಗೋದೂಂದ್ರೆ ಭಾಳಾ ದೂರವಾಯ್ತಲ್ಲ ಸ್ವಾಮೀ. ಅರ್ಧರಾತ್ರೀಲಿ ಒಬ್ರೇ ಹೋಗ ಬೇಕಲ್ಲಾ ಮುಕ್ಕಾಲು ಮೈಲಿ! ಛಳೀ ಬೇರೆ! .... ನಮಸ್ಕಾರ, ಹೋಗ್ಬಿಟ್ಟಿರೇರಾ?

[ ಛತ್ರಿಯನ್ನು ಕೈಲಿ ಹಿಡಿದು (ರ) ವರೆಗೆ ಬಂದು, ಮತೆ ಬೇಗ (ಅ) ಬಳಿಗೆ ಹೋಗಿ. ]

ತಾವೇನೂ ಅನುಮಾನ ಇಟ್ಕೊಬೇಡಿ. ಮತ್ತೆ ನಾಳೆ ಸಾಯಂಕಾಲ ಖಂಡಿತ ಬರ್ತೀನಿ ನಾಟಕದ ಪ್ರಾಕ್ಟೀಸಿಗೆ. ನೆನ್ನೆ ಅಂದರೇ, ........ ಸ್ವಲ್ಪ ಕೆಲಸ ಇತ್ತೂ, .... ಆ ಬೀದೀ

ಲೀ .... ಇವರ ಮನೆಗ್ಹೋಗ್ಬೇಕಾಗಿತ್ತೂ .... ಅದ್ರಿಂದ ಬರೋ ಕಾಗ್ಲಿಲ್ಲ, ಅಷ್ಟೆ. ನಾಳೆ ತಪ್ದೇ ಬರ್ತೀನಿ. ಅಯ್ಯೋ, ನಾಳೆ ಇಲ್ಲ ನಾಳಿದ್ದೇ ನಾಟಕಪ್ರದರ್ಶನ ಇಟ್ಕೊಂಡೂ, ನಾಳೇನೂ ಪ್ರಾಕ್ಟೀಸು ಮುಗಿಸದೇ ಇದ್ರೆ ಮರ್ಯಾದೆ ಉಳೀಬೇಕೋ ಬೇಡವೋ ಸ್ವಾಮೀ? .... ಆದ್ರೇ, ನಾಳೆ ಸ್ವಲ್ಪ ಜಾಗ್ರತೆ ಪ್ರಾರಂಭ ಮಾಡೋಣ; ಇಲ್ದೇ ಇದ್ರೆ ತುಂಬಾ ಹೊತ್ತಾಗಿ ಬಿಡುತ್ತೆ. ನೋಡಿ ಈ ದಿವ್ಸ ಎಷ್ಟೊತ್ತಾಗಿಬಿಟ್ಟಿದೆ! .... [ ಕೈಗಡಿಯಾರ ನೋಡಿಕೊಂಡು, ] .... ಈಗ ಎಷ್ಟು ಘಂಟೆ ಗೊತ್ತಿದೆಯೇ ಸ್ವಾಮೀ? ಅರ್ಧರಾತ್ರೀ ಮೇಲೆ ಅರ್ಧಘಂಟೆ! ನಾವು ಪ್ರಾಕ್ಟೀಸು ಪ್ರಾರಂಭ ಮಾಡಿದಾಗ ಎಂಟು ಘಂಟೆ. ಇಷ್ಟಾಗೀ ಐದನೇ ಅಂಕ ಪ್ರಾಕ್ಟೀಸು ಮಾಡೋದಕ್ಕಾಗ್ಲೇ ಇಲ್ಲ ಈ ಹೊತ್ತು! ಅದನ್ನೂ ಮಾಡಿದ್ರೆ, ಬೆಳಗಿನಝಾವ ಎರಡು ಘಂಟೆಗಾದ್ರೂ ಮುಗೀತಾ ಇತ್ತೋ ಇಲ್ವೋ! ಆದ್ದ ರಿಂದ, ನಾಳೆ ಸಾಯಂಕಾಲ ನಾಲಕ್ಕಕ್ಕೇ ಪ್ರಾರಂಭ ಮಾಡಿ ಬಿಡೋಣ. ಹಾಗಂತ ದಯವಿಟ್ಟು ಎಲ್ರಿಗೂ ತಿಳಿಸಿಬಿಡ್ತೀ ರಾ? ........ ಆಂ? ....... ಊಂ, ಅ ಹ್ಹ ಹ್ಹ ಹ್ಹ ಹ್ಹ ಹ್ಹ, ನಮಸ್ಕಾರ ಸ್ವಾಮೀ.

[ (ರ) ವರೆಗೆ ನಿಧಾನವಾಗಿ ಬಂದು, ಮತ್ತೆ ಏನನ್ನೋ ನೆನೆಸಿ ಕೊಂಡು, ಗಟ್ಟಿಯಾಗಿ, ]

ಆನಂದ್ರಾಯ್ರೇ, .... [ (ಅ) ಕಡೆಗೆ ಒಂದು ಹೆಜ್ಜೆಯಿಟ್ಟು, ಗಟ್ಟಿ ಯಾಗಿ, ] ನಾ ಹೇಳಿದ್ದು ಜ್ಞಾಪಕ ಇರುತ್ತೋ? ನಾಳಿದ್ದು

ನನ್ನ ವೇಷಕ್ಕೆ ಒಂದು ಒಳ್ಳೇ ಸೀರೆ, ಒಂದು ಜೊತೆ ಲೌಲಕ್ಕು ನೋಡೀ ಸ್ವಾಮೀ .... ಮರೀಬೇಡೀ ....

[ (ರ) ಎಂಬಲ್ಲಿ ನಿಂತು, (ಇ) ಬಾಗಿಲಕಡೆ ಎರಡುಸಲ ನೋಡಿ, ಯೋಚನೆಯಿಂದ ಕೈಗಡಿಯಾರ ನೋಡಿಕೊಳ್ಳುತ್ತ ಹುಬ್ಬು ಮೇಲಕ್ಕೆತ್ತಿ, ]

ಅರ್ಧರಾತ್ರೀ ಆಗ್ಹೋಗಿದೆಯಲ್ಲಾ .... ಮನೇವರೆಗೇನೋ ಬಂದದ್ದಾಯ್ತು ಊ .... ಈಗ ಒಳಕ್ಹೋಗೋದ್ಹ್ಯಾಗೇ ? .... ಮೊನ್ನೇ ರಾತ್ರೀತಾನೇ ರಾದ್ಧಾಂತಾಮಾಡಿ, 'ಇನ್ನುಮೇಲೆ ಹೊತ್ತುಮೀರಿ ಮನೆಗೆ ಬರೋಲ್ಲಾ' ಅಂತ ಭಾಷೆ ತಕ್ಕೊಂಡು ಬಾಗಿಲು ತೆಗದಿದ್ದು ! ಆ ಸಿಟ್ಟು, ಅವಳಿಗಿನ್ನೂ ಇಳಿದಿಲ್ಲ. ಮಾತಾಡ್ನೋದೇ ಕೈಬಿಟ್ಟಿದ್ದಾಳೆ ! ಈ ರಾತ್ರೀನೂ ಹೊತ್ತಾಗ್ಹೋಯ್ತಲ್ಲಾ ಈ ನಾಟಕದ ಪ್ರಾಕ್ಟೀಸೂ ! ಈಗೇನು ಬಾಗಿಲು ತೆಗೀತಾಳೋ, ತೆಗ್ಯೋದೇ ಇಲ್ವೋ !

[ ಮೆಲ್ಲನೆ ಹೆಜ್ಜೆ ಇಟ್ಟುಕೊಂಡು ಹೋಗಿ, (ಇ) ಬಾಗಿಲನ್ನು ಒತ್ತಿನೋಡಿ, ಅಲ್ಲೇ ಪಕ್ಕದಮೇಲೆ ನಿಂತು,]

ಭದ್ರವಾಗಿ ಹಾಕಿಬಿಟ್ಟಿದಾಳೆ ! .... [ ಸ್ವಲ್ಪ ಕೆಮ್ಮಿ, ] .... ಉಹುಂ, .... [ ಧೈರ್ಯ ತಂದುಕೊಂಡು ಬಾಗಿಲಮೇಲೆ ಬೆರಳಿನಿಂದ ಟಕಟಕ ಶಬ್ದಮಾಡಿ, ] .... ಸಿಟ್ಟು ಬಂದಿದೆ ! .... [ ಮೃದುವಾಗಿ, ] ಕುಸುಮಾ, ... .... [ ಇನ್ನು ಸ್ವಲ್ಪ ಗಟ್ಟಿಯಾಗಿ, ] ಕುಸುಮಾ,

[ ಹತಾಶನಾಗಿ (ಯ) ಎಂಬಲ್ಲಿಗೆ ಬಂದು, ]

ಏನ್ಮಾಡೋದೀಗಾ ? ನಿದ್ದೇನೇ ಹೋಗಿಬಿಟ್ಟಿದಾಳೋ ಏನೋ !

[ ಮತ್ತೆ (೩) ಬಾಗಿಲ ಬಳಿ ಹೋಗಿ, ]

ನಿದ್ದೆಹೋಗಿದೀಯೇನೇ? .... ನಾನ್ಬಂದಿದೀನಿ ಏಳೇ .... ಬಾಗ್ಲು, ಬಾಗ್ಲೂ .... ಜವಾಬೇ ಇಲ್ವಲ್ಲಾ ! ಎದ್ದಿದೀಯಾ ? ........ [ ಬಾಗಿಲನ್ನು ದಬದಬ ಹೊಡೆಯುವನು. ] .... ಹಾಗಾದ್ಮೇಲೆ ಎದ್ದೇ ಇದಾಳೇಂತ ಆಯ್ತು ! .... ನಿನ್ನ ದಮ್ಮಯ್ಯ ಕುಸುಮಾ, ಈ ಹೊತ್ತೊಂದಿವ್ಸ ಬಾಗಿಲು ತೆಗೀ, ಇನ್ಮೇಲೆ ಹೀಗ್ಮಾಡೋದಿಲ್ಲಾ .... ಜವಾಬನ್ನಾ ಕೊಡೇ .... ಅಂ ? .... ಏನಂದೇ ? .... "ಅವಳ ಮನೆಗೇ ಹೋಗೀ" ! ? .... ಚನ್ನಾಯ್ತು ! ಇಷ್ಟನುಮಾನ ಆದ್ರೆ ಹ್ಯಾಗೇ? .... ನಿಜವಾಗೂ ನಾಟಕದ ಪ್ರಾಕ್ಟೀಸಿಗೇ ಹೋಗಿದ್ದದ್ದು ಕುಸುಮಾ. ಆನಂದ್ರಾಯ್ರೂ ಜೊತೇಲಿ ಇಲ್ಲೀವರೆಗೂ ಬಂದಿದ್ರು. ಒಳಗೆ ಬಂದ್ಮೇಲೆ ಎಲ್ಲಾ ಹೇಳ್ತೀನಿ. ಭಾಳಾ ಛಳಿ ಇಲ್ಲಿ—ಬೇಕಾದ್ರೆ ಬಂದು ನೋಡು.

[ ಮುಂದಕ್ಕೆ ಬಂದು ಶತಪಥ ಹಾಕುತ್ತ, ]

ಒಂದೇ ಹಠ ಹಿಡಿದುಬಿಟ್ಟಿದಾಳಲ್ಲಾ, ಈಗೇನ್ಮಾಡೋದೂ ? .... .... ಚತುರೋಪಾಯಗಳನ್ನೂ ಮಾಡಿ ನೋಡೋಣ. ಸಾಮೋಪಾಯ ಫಲಿಸಲಿಲ್ಲ. ಇನ್ನು ದಾನೋಪಾಯ ....

[ (೩) ಬಾಗಿಲ ಬಳಿಗೆ ಹೋಗಿ, ]

ಅಲ್ಲಾ, ಕಸೂತಿದಾರ ಬೇಕೂಂದ್ಯಲ್ಲೇ .... ಇಗೋ ನೋಡು ತಂದಿದೀನಿ, ಒಂದು ಪೆಟ್ಟಿಗೆ ತುಂಬಾ ! .... ಹ್ಯಾಗಿದೇಂತೀ ಬಣ್ಣಾ ! .... ಅಂ ? .... ನಿಂಗೇನೂ ಬೇಡವೇ .... ಬಿಡು ಹಾಗಾದ್ರೆ ....

[ ಈಚೆ ಬಂದು, ]

ಬಾಗಿಲು ತೆಗೀಲೇವೊಲ್ಲಳಲ್ಲಾ ! .... ಇನ್ನು ಭೇದೋಪಾಯ ಮಾಡಿ ನೋಡೋಣ.

[ (ಇ) ಬಾಗಿಲ ಬಳಿಗೆ ಹೋಗಿ, ]

ಕಸೂತಿದಾರ ಎಲ್ಲ ನನ್ನ ತಂಗೀಗೇ ಕೊಟ್ಬಿಡ್ಲೋ ಹಾಗಾದ್ರೇ? .... ಆಂ ? .... ಕೊಟ್ಬಿಡೀಂದ್ಯಾ ? ....

[ ಈಚೆ ಬಂದು, ]

ಸರಿ ಹಾಗಾದ್ರೆ — 'ದಂಡಂ ದಶಗುಣಂ ಭವೇತ್'.

[ (ಇ) ಬಾಗಿಲ ಬಳಿಗೆ ಹೋಗಿ, ]

ಇಗೋ ನೋಡು ಕುಸುಮಾ, ಇನ್ನು ರೇಗ್ಹೋಗುತ್ತೆ ನನಗೆ. ಅಷ್ಟಕ್ಕವಕಾಶ ಕೊಡಬೇಡ ........ ತೆಗ್ಯೇ ಬಾಗ್ಲು ........ [ ಬಾಗಿಲನ್ನು ದಬದಬ ಹೊಡೆಯುವನು. ] ಇನ್ನು ನೋಡು, ಅನ್ಯಾಯವಾಗಿ ಏಟು ಬೀಳುತ್ತೆ .... ಆಂ ? .... ಬೀಳ್ಲೀಂದ್ಯಾ? ಹಾಗಾದ್ರೆ ತೆಗೀ ಮತ್ತೆ ಬಾಗ್ಲು .... ತೆಗೀತೀಯೋ ಇಲ್ವೇ ಬಾಗ್ಲು ....

[ ಈಚೆ ಬಂದು, ]

ಇವಳು ಯಾವ ಉಪಾಯಕ್ಕೂ ಜಗ್ಗೋಹಾಗೇ ಇಲ್ವಲ್ಲಾ ! ಬಾಗಿಲು ತೆಗೆದರೇ ಅಲ್ವೇ ಉಪಾಯ ? .... ಬೆಳಗಾಗೋ ತನಕ ಈ ಛಳೀಲಿ ಸಾಯೋ ಗತಿ ಬಂತಲ್ಲಾ ! ಹುಂ !

[ (ಕ) ಕಟ್ಟೆಯಮೇಲೆ ಕುಳಿತು ಸ್ವಲ್ಪಹೊತ್ತು ಯೋಚಿಸಿ, ಒಂದು ನಿರ್ಧಾರಕ್ಕೆ ಬರುವನು. ಆಮೇಲೆ ಬಾಗಿಲ ಚಿಲಕವನ್ನೂ

ಕೈಯಲ್ಲಿರುವ ಛತ್ರಿಯನ್ನೂ ನೋಡುವನು. ಎದ್ದು ಮುಂದಕ್ಕೆ ಬಂದು, ]

ಈ ಮಾವಿನಕಾಯಿ ಹೀಗೆ ಕಲ್ಲಿಗೆ ಉದುರೋದಿಲ್ಲ ಇದಕ್ಕೆ ತಕ್ಕ ಮಂತ್ರ ಹಾಕಬೇಕು. ನಾಟಕದಿಂದತಾನೇ ಇಷ್ಟೆಲ್ಲಾ ಆಗಿರೋದು? ಇದನ್ನು ನಾಟಕದಿಂದಲೇ ಸರಿಪಡಿಸಬೇಕು. ಈ ಛತ್ರಿ ಈ ಚಿಲಕಕ್ಕಿರಲಿ

[ ಮೆಲ್ಲನೆ ಹೋಗಿ, ಬಾಗಿಲು ಚಿಲಕ ಹಾಕಿ, ಛತ್ರಿಯನ್ನು ನಿಃಶಬ್ದವಾಗಿ ಚಿಲಕಕ್ಕೆ ತಗಲುಹಾಕಿ, (ಯ) ಎಂಬಲ್ಲಿಗೆ ಬಂದು, ತಾನು ಮಾಡಿರುವ ಉಪಾಯವನ್ನು ನೆನೆದು ಹಿಗ್ಗುವನು. ಆಮೇಲೆ, (ರ) ಎಂಬಲ್ಲಿಗೆ ಮೋಹಿನಿ ಎಂಬವಳು ಬಂದು ನಿಂತಿರುವಂತೆ ಭಾವಿಸಿ, ಅವಳನ್ನು ನೋಡಿ ಕೈ ಹಿಸುಕಿಕೊಳ್ಳುತ್ತ: ]

ಯಾರು ! ಮೋಹಿನಿ !! .... ಅಯ್ಯೋ ಅಯ್ಯೋ, ಮೋಹಿನೀ, ಇಲ್ಲೀಗ್ಯಾಕೆ ಬಂದ್ಯೇ ನೀನೂ ?

[ (ರ) ಎಂಬಲ್ಲಿಗೆ ಸರಿದು, ಬುಸುಗುಟ್ಟುತ್ತ , ಸ್ತ್ರೀಕಂಠದಲ್ಲಿ: ]

'ಇಲ್ಲೀಗ್ಯಾಕ್ಬಂದ್ಯೆ ? ' ! ಕ್ಕೇಳೋದ್ನೋಡ್ಲಿಲ್ಲ ! ಕಾದೂ ಕಾದೂ ಸಾಕಾಯ್ತು ನನಗೆ ಮಲ್ಲಿಗೇ ಚಪ್ಪರದಲ್ಲಿ. ಅಲ್ಲಾ, ಹನ್ನೊಂದು ಘಂಟೆಗೆ ಸರಿಯಾಗಿ ಮಲ್ಲಿಗೇ ಚಪ್ಪರಕ್ಕೆ ಬರ್ತೀ ನೀಂತ ಹೇಳಿಬಿಟ್ಟೊ, ....

[ (ಯ) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ :]

ಹುಶ್ ! ಮೆಲ್ಲಗೆ ಮಾತ್ನಾಡು, ನಿನ್ನ ದಮ್ಮಯ್ಯ .... ಒಳಗೆ ಎದ್ದಿದಾಳೆ, ಕೇಳಿಸಿಬಿಟ್ಟೀತು ! .... ಸುಧಾರಿಸ್ಕೋ, ಬುಸು ಗುಟ್ತಾ ಇದೀಯಲ್ಲಾ ನಾಗರಹಾವಿನ್ಹಾಗೇ !

[ (ರ) ಎಂಬಲ್ಲಿಗೆ ಸರಿದು, ಸ್ತ್ರೀಕಂಠದಲ್ಲಿ : ]

ಕೇಳಿಸ್ಲೀಂತಾಲೇ ಮತ್ತೆ .... ಅಲ್ಲಾ, ಮನೇಲೂ ಇಲ್ಲಾ, ಮಲ್ಲಿಗೇ ಚಪ್ರಕ್ಕೂ ಬರ್ಲಿಲ್ಲಾ ! ಎಲ್ಲೀಗ್ಹೋಗಿತ್ತು ಸವಾರೀ ?

[ (ಯ) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ : ]

ಇನ್ನೇನ್ಗತಿ ! .... ಸ್ವಲ್ಪ ಮುಂದಕ್ಬಾ, ಮೆಲ್ಲಗ್ಮಾತಾಡೂ .... ನೋಡೂ, ಮೆಲ್ಲಗ್ಮಾತಾಡಿದ್ರೆ ಎಲ್ಲಾ ಹೇಳ್ತೀನಿ.

[ (ರ) ಎಂಬಲ್ಲಿಗೆ ಸರಿದು, ಸ್ತ್ರೀಕಂಠದಲ್ಲಿ : ]

ಇಂಥಾ ಬೆಲ್ಲದಂಥಾ ಮಾತಿಗೇನು ಕಡಮೆ ? .... ಅಲ್ಲಾ, ನೀವು ತರ್ತೀನೀಂತ ಹೇಳಿದ್ದದ್ದೆಲ್ಲೀ ?

[ (ಯ) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ : ]

ಏನ್ಹೇಳಿದ್ದೆ ಮೋಹಿನೀ, .... ಜ್ಞಾಪಕ ಇಲ್ಲ.

[ (ರ) ಎಂಬಲ್ಲಿಗೆ ಸರಿದು, ಸ್ತ್ರೀಕಂಠದಲ್ಲಿ : ]

ಪತಿಸೇವಾ ಬಳೀ ....

[ (ಯ) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ : ]

ನಿನಗ್ಯಾತಕ್ಕೇ ಪತಿಸೇವಾ ಬಳೀ ?

[ (ರ) ಎಂಬಲ್ಲಿಗೆ ಸರಿದು, ಸ್ತ್ರೀಕಂಠದಲ್ಲಿ : ]

ಈಗೇನ್ತಂದಿಲ್ಲಾತಾನೇ ? .... [ಬಿಕ್ಕಿ ಬಿಕ್ಕಿ ಅಳುತ್ತ, ಗಟ್ಟಿಯಾಗಿ : ] ಇಷ್ಟೊತ್ತೂ ಕಾದಿದ್ದಕ್ಕೆ ಇಷ್ಟೇನೇ ಪ್ರತಿಫಲಾ ?.... ಉಹ್ಞಂ, ಉಹ್ಞಂ, ....

[ (ಯು) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ : ]

ಅಯ್ಯೋ, ಮೆಲ್ಲಗಳೇ. ಮೆಲ್ಲಗತ್ತರೆ ನಾಳೆ ತಂದುಕೊಡ್ತೀನಿ .... [ ಬಾಗಿಲುಕಡೆ ನೋಡಿ, ] ಅಯ್ಯೋ, ಒಳಕ್ಕೇಳ್ಸೇಬಿಡ್ತು ! ಬಾಗಿಲೆಳೀತಾ ಇದಾಳೆ .... ಅವಳಿನ್ನು ಹೊರಗೆ ಬಂದ್ರೆ, ನನಗೂ ನಿನಗೂ ಇಬ್ರಿಗೂ ಆಗುತ್ತೆ ಪೂಜೆ. ಹೋಗು ನೀನಿಲ್ಲಿಂದ ಮೊದ್ಲು ... ಹೋಗೂ, ನಾಳೆ ಖಂಡ್ತ ತಂದ್ಕೊಡ್ತೀನಿ.

[ (ರ) ಎಂಬಲ್ಲಿಗೆ ಬಂದು, ಸ್ತ್ರೀಕಂಠದಲ್ಲಿ : ]

ನಾಳೆ, ನಾಳೆ, ನಾಳೆ ! ಎಂದೇನ್ಕೇಳಿದ್ರೂ ನಾಳೆ ! ....ತಾಳಿ, ನಿಮಗ್ಬುದ್ಧೀ ಕಲಿಸ್ತೀನಿ. [ (ಇ) ಬಾಗಿಲಕಡೆ ಹೋಗುವನು. ]

[ (ಯು) ಎಂಬಲ್ಲಿಗೆ ಬಂದು, ಪುರುಷಕಂಠದಲ್ಲಿ : ]

ಅಯ್ಯೋ ಅಯ್ಯೋ ಚಿಲಕಕ್ಕಾ ಕಿರೋ ಛತ್ರಿ ತೆಗೀತಾಳಲ್ಲಾ, ಇನ್ನೇನ್ಗತಿ ! [ (ಇ) ಬಾಗಿಲಕಡೆ ಹೋಗುತ್ತ, ] ಬೇಡ, ಬೇಡ, ನನ್ನಾಣೆ ಬೇಡ.

[ ಬಾಗಿಲಿಗೆ ಇನ್ನೂ ಹತ್ತಿರಹೋಗಿ, ಸ್ತ್ರೀಕಂಠದಲ್ಲಿ : ]

ಬಿಡೀಂದ್ರೆ ಕೈನಾ .... ಬಿಡ್ತೀರೋ ಇಲ್ವೋ .... [ ಬಾಗಿಲನ್ನು ಕುರಿತು : ] ಕುಸುಮಾದೇವೀ, ಕುಸುಮಾದೇವೀ, ಇನ್ನೂ ಜಗ್ಸೆಳೀರ್ರೀ ಬಾಗಲ್ನಾ — ಆ ಛತ್ರೀ ಬಿದ್ಹೋಗೋಹಾಗೇ .... ಸಾಲ್ದು ಸಾಲ್ದೂ, ಇನ್ನೂ ಜೋರಾಗಿ .... ಊಂ, ಹಾಗೇ ! ಝಾಡ್ಸಿ ಇನ್ನೊಂದ್ಸಲ .... ಇಗೋ, ಬಾಯಿ ಮೇಲೆ ಮಾತ್ರ ಕೈಮುಚ್ಕೋಕ್ಬರಬೇಡಿ ವಸಂತ್. ಇಗೋ, ಬೇಡೀ, ಬೇಡೀ, ....

[ ಸ್ವಲ್ಪ ಸರಿದು, ಕೈ ಕೊಡವುತ್ತ, ಪುರುಷಕಂಠದಲ್ಲಿ : ]
ಅಹಹಾ ! ಕಚ್ಚಿಬಿಟ್ಯಲ್ಲೇ ಕೈನಾ ! ರಕ್ತಬಂತೂ ! ಎಷ್ಟು ರೋಷಾನೇ ನಿನಗೇ ! [ ಬಾಗಿಲಬಳಿ ಹೋಗಿ, ಛತ್ರಿಯನ್ನು ಅಡುಕಿಕೊಂಡು, ] ಬೇಡಾ ಬೇಡಾ, ತೆಗೀಬೇಡಾ.

[ ಹಾಗೇ ಪಕ್ಕಕ್ಕೆ ತಿರುಗಿ, ಸ್ತ್ರೀಕಂಠದಲ್ಲಿ : ]
ಬಿಡೀಂದ್ರೆ ಛತ್ರೀನಾ .... ಆಕೆ ಪಾಪ, ಹೊಡಕೋತಾ ಇದಾಳೆ ಒಳಗೆ ! ನೋಡಿ, ಅನ್ಯಾಯವಾಗಿ ನೀವು ಛತ್ರಿ ಮುರಿಧಾಕಿಬಿಡ್ತೀರಿ, ಆಕೆ ಬಾಗಿಲು ಮುರಿಧಾಕಿಬಿಡ್ತಾಳೆ !

[ ಹಾಗೇ ಇತ್ತ ತಿರುಗಿ, ಪುರುಷಕಂಠದಲ್ಲಿ : ]
ನೀ ಹೊರಠೋಗು ಮತ್ತೆ, ನಾ ತೆಗೀತೀನಿ.

[ ಹಾಗೇ ಅತ್ತ ತಿರುಗಿ, ಸ್ತ್ರೀಕಂಠದಲ್ಲಿ : ]
ಹೊರಠೋಗ್ತೀನಿ, ಆಕೆ ಸಂಗ್ಡ ಸ್ವಲ್ಪ ಮಾತಾಡ್ಬಿಟ್ಟೂ.

[ ಹಾಗೇ ಇತ್ತ ತಿರುಗಿ, ಛತ್ರಿಯನ್ನು ಬಲವಾಗಿ ಎಳೆಯುತ್ತ, ಪುರುಷಕಂಠದಲ್ಲಿ : ]
ಉಙ್ಙಂ, ಉಙ್ಙಂ, ಎಷ್ಟು ಶಕ್ತಿ ಇದೆ ಇವಳಿಗೆ ! [ ಛತ್ರಿಯನ್ನು ಬೀಳಿಸಿ, ] ತುಂಡೇ ಆಗ್ಹೋಯ್ತಲ್ಲೇ ಛತ್ರೀ !

[ ಅಲ್ಲೇ ಅತ್ತ ತಿರುಗಿ, ಸ್ತ್ರೀಕಂಠದಲ್ಲಿ :]
ಇನ್ನು ಚಿಲಕಕ್ಯಾಕ್ಕೈ ಹಾಕ್ತೀರಿ, ತೆಗೀರ್ರೀ ....

[ ಬಾಗಿಲು ತೆಗೆದು, ಹೊಸಿಲೊಳಕ್ಕೆ ಪ್ರವೇಶಿಸಿ, ಪಕ್ಕಕ್ಕೆ ತಿರುಗಿ, ಸ್ತ್ರೀಕಂಠದಲ್ಲಿ : ]
ಇಲ್ನೋಡಿ, ಕುಸುಮಾದೇವೀ, ನಿಮ್ಮೆಜಮಾನ್ರೂ ಅರ್ಧ

ನಾರೀ ವೇಷ ಹಾಕ್ಕೊಂಡ್ಬಂದಿದಾರೆ. ಇಷ್ಟು ಮಾಡ್ದಿದ್ರೆ ನೀವು ಬಾಗಿಲು ತೆಗೀತಾ ಇದ್ರಾ?

[ ಆಲ್ಲೇ ನಗುತ್ತ, ಪುರುಷಕಂಠದಲ್ಲಿ : ]

ಅಹ್ಹಹ್ಹ! ಕುಸುಮಾ, ಕುಸುಮಾ, ಇಷ್ಟು ಸುಮಾನವೇ ನಿನಗೆ ನನ್ಮೇಲೇ? [ ಹೊರಕ್ಕೆ ಅಂಗೈ ನೀಡಿ ತೋರಿಸುತ್ತ, ] ಇಲ್ನೋಡು, ಹೊರಗೆ ಮೋಹಿನೀನೂ ಇಲ್ಲಾ, ಯಾರೂ ಇಲ್ಲ! [ ಹೊಸಿಲಮೇಲೆ ಬಿದ್ದಿರುವ ಛತ್ರಿಯನ್ನು ತೆಗೆದುಕೊಂಡು,] ನೋಡಿದ್ಯಾ, ಛತ್ರೀನೂ ತುಂಡಾಗಿಲ್ಲ! .... ಅಂತು, ಒಬ್ಬನ ಸಂಗಡಲೇ ನಾಟಕ ಆಡಿಸಿಬಿಟ್ಯಲ್ಲೇ!! ಅ ಹ್ಹ ಹ್ಹ ಹ್ಹ ಹ್ಹ !!!

[ ತೆರೆ ಬೀಳುವುದು ]

---

— ಸಂಪೂರ್ಣ —

## ಕಥಾಸಾರಾಂಶ

ನಿದ್ರೆಯಿಂದ ಎದ್ದಕೂಡಲೇ

ಒಂದುಸಲ ಕಿಟಕಿಯಿಂದ

ಹೊರಗೆ ನೋಡುವುದು

ಒಳ್ಳೆಯದು.

---

ರಾಯಲ್ಟಿ

ಪ್ರದರ್ಶನವೊಂದಕ್ಕೆ ರೂ. ೫

# ಸಿದ್ಧತೆ

## ಪಾತ್ರವಿವರ

**ಲಾಯರು:** ವೃದ್ಧ ವಯಸ್ಸು. [ಜರತಾರಿ ಕಂಬಿ **ಅಂಚಿನ** ಕಚ್ಚೆಪಂಚೆ; ಟ್ವಿಲ್‌ಷರ್ಟ್; ಮೋಟುಕ್ಯಾಪ್; ದುಂಡುಮೀಸೆ; ಹಣೆಯಲ್ಲಿ ಬೊಟ್ಟು; ಎಡಗೈ ಬೆರಳಿಗೆ ಒಂದು ಉಂಗುರ; ಜೇಬಿನಲ್ಲಿ ಕರವಸ್ತ್ರ.]

## ಸ್ಥಳ

ಯಿದ್ದೂರಲ್ಲಿ ಲಾಯರ ಮನೆಯ ಅಂತಃಪುರ. ಆದರ ನಕ್ಷೆ ಹೀಗಿದೆ:—




ಅ, ಇ: ಬಾಗಿಲುಗಳು.

ಉ: ಕಿಟಕಿ

ಕ: ಆಯಾಸ ಕುರ್ಚಿ. ಇದರ ಮುಂದೆ ಒಂದು ಜೊತೆ ಜೋಡು ಇವೆ.

ಚ: ದಿಂಬು ಕುರ್ಚಿ.

ಟ: ಮಂಚ. ಸೊಗಸಾದ ಹಾಸಿಗೆ, ರಗ್ಗು ಮತ್ತು ತೆರೆ ಉಳ್ಳದ್ದು. ತೆರೆಯು ಮುಂದುಗಡೆ ತೆರೆದಿರುವುದು. ಚಪ್ಪರದ ಕಂಭಗಳ ಮೇಲ್ಭಾಗದಲ್ಲಿ ಹಿತ್ತಾಳೆಯ ಕಟ್ಟೆಗಳು ಮಿನುಗುತ್ತಿರುವುವು.

ತ: ದುಂಡು ಮೇಜು. ಚಿತ್ರವಸ್ತ್ರ ಹೊದಿಸಿದೆ. ಮೇಲೆ ಒಂದು ಟೆಲೆಫೋನ್, ಮತ್ತು ಆರು ಘಂಟೆಗೆ ಸರಿಯಾಗಿ ಅಲಾರಂ ಹೊಡೆಯುವ ಗಡಿಯಾರ, ಇವೆ.

ಪ: ಮೇಜು. ವಸ್ತ್ರ ಹೊದಿಸಿದೆ. ಮೇಲೆ ಟೆಲಿಫೋನ್ ಕೋಶ, ರೈಲ್ವೇ ಗೈಡ್, ಲಾಯರ ದೊಡ್ಡ ಡಯರಿ, ಟೂತ್ ಪೇಸ್ಟ್, ಟೂತ್ ಬ್ರಷ್, ಸೋಪ್ ಬಾಕ್ಸ್, ಥರ್ಮೋಫ್ಲಾಸ್ಕನಲ್ಲಿ ಕಾಫೀ, ಒಂದು ಕನ್ನಡಿ, ಇವೆ.

ಯ: ಉಡುಪಿನ ನಿಲುವು. ಮೇಲೆ ಎರಡು ಟವಲು, ಒಂದು ಕರೀ ಲಾಂಗ್‌ಕೋಟ್, ಮೈಸೂರು ಶೈಲಿಯಲ್ಲಿ ಸುತ್ತಿದ ಜರೀ ರುಮಾಲು, ಶಲ್ಯ, ವಾಕಿಂಗ್‌ಸ್ಟಿಕ್, ಇವೆ. ಮತ್ತು ಇದರ ಮುಂದೆ ಒಂದು ತೊಗಲಿನ ಸ್ಯೂಟ್ ಕೇಸ್ ಇದೆ.

ರ, ಲ: ಸ್ಥಳ ಸಂಕೇತಗಳು.

[ಎದುರು ಗೋಡೆಯ ಮಧ್ಯೆ ಒಂದು ತಾರೀಖು ಪಟ್ಟಿ, ಮತ್ತು ಎರಡು ಭಾರಿ ಚಿತ್ರಪಠಗಳು ಹಾಕಿವೆ. ]

ಈ ನಾಟಕದಲ್ಲಿ ಅಲ್ಲಲ್ಲಿ ಕೊಟ್ಟಿರುವ ಅಕ್ಷರ ಸಂಕೇತಗಳು ಈ ನಕ್ಷೆಗೆ ಅನ್ವಯಿಸುತ್ತವೆ.

## ಕಾಲ

ಸಾಯಂಕಾಲ ೫-೫॥ ಘಂಟೆಯಿಂದ ಮುಂದಕ್ಕೆ ಸ್ವಲ್ಪ ಕಾಲ.

## ತೆರೆಯ ಹಿಂದೆ

ತೆರೆಯ ಹಿಂದೆ, (ಅ) ಬಾಗಿಲ ಬಳಿ, ಒಂದು ಮೇಜಿನ ಮೇಲೆ ಎರಡು ಪೋಸ್ಟ್‌ಕಾರ್ಡ್ ಸಿದ್ಧವಾಗಿರುವುವು.

---

# ಲಾಯರ ಪ್ರಯಾಣ

---

[ ಮಂಚದಮೇಲೆ ಲಾಯರು ನಿದ್ರಿಸುತ್ತಿರುವರು. ಅವರ ತಲೆ (ಯು) ಕಡೆಗೆ ಇರುವುದು. ಪ್ರೇಕ್ಷಕರ ಕಡೆಗೆ ಮುಖಮಾಡಿಕೊಂಡು ಎಡಪಕ್ಕದಲ್ಲಿ) ಮಲಗಿರುವರು. ಕಾಲಿನ ಮೇಲೆ ಮಾತ್ರ ರಗ್ಗು ಹೊದೆದಿರುವರು. ]

[ ತೆರೆ ಏಳುವುದು ]

## ಲಾಯರು

[ ಕನಸು ಕಾಣುತ್ತ ಗಟ್ಟಿಯಾಗಿ ಮಾತಾಡಿಕೊಳ್ಳುವರು : ]

ಒಂದೂ ಏಳೂ—ಎಂಟು ! .... [ ಸ್ವಲ್ಪ ಹೊತ್ತಿನ ಮೇಲೆ, ] ಎಂಟೂ ಏಳೂ—ಹದಿನೈದು ! .... [ ಸ್ವಲ್ಪ ಹೊತ್ತಿನ ಮೇಲೆ ] ಹದಿನೈದೂ ಏಳೂ — ಇಪ್ಪತ್ತೆರಡು ! .... ಈ ತಿಂಗಳು ಒಂದನೇ ತಾರೀಖು ಗುರುವಾರ. ಆದ್ದರಿಂದ ಇಪ್ಪತ್ತೆರಡನೇ ತಾರೀಖೂ ಗುರುವಾರವೇ ! ಹಾಗಾದರೆ ನಿನ್ನೆ ಇಪ್ಪತ್ಮೂರು ಶುಕ್ರವಾರ, ಈ ಹೊತ್ತು ಇಪತ್ನಾಲಕ್ಕು ಶನಿವಾರ ! ಓಹೋ !!

[ ಎಂದು ಎದ್ದು ಕುಳಿತು, ಸುತ್ತಲೂ ನೋಡಿ, ]

ಏನೋ ಕನಸು ! .... [ ಕಿರುನಗೆಯಿಂದ ] .... ಹುಂ ! .... [ ಹುಬ್ಬು ಗಂಟಿಟ್ಟು, ] ಆಗ್ಲೇ ಬೆಳಕಾಗಿಬಿಟ್ಟಿದೇ ! ಘಂಟೆ ಎಷ್ಟಾಗಿದ್ಯೋ ಈಗ ! ....

[ ಗಡಿಯಾರವು ಆರು ಘಂಟೆ ಅಲಾರಂ ಹೊಡೆಯುವುದು. (ತ) ; ಹೋಗಿ ಅಲಾರಂ ನಿಲ್ಲಿಸಿ, ಗಡಿಯಾರವನ್ನು ಕುರ್ಚಿಯ ಕಡೆಗೆ ತಿರುಗಿಸಿಟ್ಟು, (ರ) ಎಂಬಲ್ಲಿಗೆ ಬಂದು, ಹುಬ್ಬು ಮೇಲಕ್ಕೆ ಮಾಡಿ, ]

ಆರು ಘಂಟೆ ಆಯ್ತು. ಇನ್ನು ಎದ್ದುಬಿಡೋಣ. ........ [ ಮಂಚದಕಡೆ ನೋಡಿ, ] ಎಡ ಮಗ್ಗುಲಲ್ಲಿ ಎದ್ದಾಗಾಯ್ತಲ್ಲಾ, ........

[ ಎಂದು ಮತ್ತೆ ಮಲಗಿದ ಶಾಸ್ತ್ರ ಮಾಡಿ, ಬಲ ಮಗ್ಗುಲಲ್ಲಿ ಎದ್ದು ಹಾಸಿಗೆಯ ಮೇಲೇ ಕುಳಿತು, ]

ಉತ್ತಿಷ್ಠೋತ್ತಿಷ್ಠ ಗೋವಿಂದ—ಉತ್ತಿಷ್ಠ ಗರುಡಧ್ವಜ ।
ಉತ್ತಿಷ್ಠ ಕಮಲಾಕಾಂತ—ಉತ್ತಿಷ್ಠ ಜಗತಃಪತೇ ॥

[ ಎದ್ದು, (ರ) ಎಂಬಲ್ಲಿಗೆ ಬಂದು, ಹಸ್ತಗಳನ್ನು ಸವರಿಕೊಂಡು ನೋಡಿಕೊಳ್ಳುತ್ತ, ]

ಕರಾಗ್ರೇ ವಸುಧಾಲಕ್ಷ್ಮೀ—ಕರಮಧ್ಯೇ ಸರಸ್ವತೀ ।
ಕರಮೂಲೇ ಸ್ಥಿತಾ ಗೌರೀ—ಪ್ರಭಾತೇ ಕರದರ್ಶನಂ ॥
ಅಹಲ್ಯಾ ದ್ರೌಪದೀ ತಾರಾ—ತಾರಾಮಂಡೋದರೀ ತಥಾ।
ಪಂಚಕನ್ಯಾಃ ಪಠೇನ್ನಿತ್ಯಂ—ಮಹಾಪಾತಕ ನಾಶನಂ ॥

[ (ಅ) ಬಾಗಿಲ ಬಳಿಗೆ ಹೋಗಿ, ]

ಲೋ, ಹುಡುಗಾ, .... ಹುಡುಗಾ, .... ಹಂಡೇದಲ್ಲಿ ನೀರು ಕಾದಿದ್ಯೇ ಸ್ನಾನಕ್ಕೇ ? .... ಅಂ ? .... ಇಲ್ವೇ ? .... ಹಾಗಾದ್ರೇ, ಮೊದಲು ಎಲೆಕ್‌ಟ್ರಿಕ್ ಸ್ವಿಚ್ ಹಾಕಿಬಾ ಹೋಗು, ಹಂಡೇಗೆ; ನೀರು ಕಾಯ಼್ಲಿ. ಸ್ನಾನಾಮಾಡಬೇಕು ಜಾಗ್ರತೆ....

ಏನೋ ಅದು ಗೊಣಗೋದೂ ? ಹೇಳಿದಷ್ಟು ಕೆಲಸವಾದು ಹೋಗು. .... [ ಈಚೆ ಬರುತ್ತ, ] ಒಳ್ಳೇ ಅವಸ್ಥೆ ಬಂತಲ್ಲಾ ಈ ಜವಾನ್ರು ಹುಡುಗನ ಸಂಗಡ ನನಗೇ ! ಮನೇವ್ರು ಊರಲ್ಲಿದ್ದಿದ್ರೆ, ಏಳೋ ಹೊತ್ತಿಗೆ ನೀರು ಸಿದ್ಧವಾಗಿರ್ತಾ ಇತ್ತೂ .... ಹುಂ ! ....

[ ಶತಪಥ ಹಾಕುತ್ತ, ]

ಸೊಗಸಾದ ನಿದ್ರೆ ಬಂತು ! .... ಕೊನೇಲಿ ಏನೋ ಕನಸು ! ಯಾಕೋ ತಾರೀಖು ಲೆಕ್ಕ ಹಾಕ್ತಾ ಇದ್ದೆ, ಕನಸಿನಲ್ಲಿ ! .... ಓಹೋ, ಇಪ್ಪತ್ನಾಲಕ್ನೇ ತಾರೀಖು ಶನಿವಾರ ಅಲ್ವೇ ಈ ಹೊತ್ತೂ ? .... [ ತಾರೀಖು ಪಟ್ಟಿ ನೋಡಿ, ] .... ಹೌದು, ಶನಿವಾರ — ಇಪ್ಪತ್ನಾಲಕ್ಕು. .... ಹಾಗಾದ್ರೆ ಈ ಹೊತ್ತೇ ದೇವರ ಬೆಟ್ಟದಿಂದ ಮನೇವ್ರು ಬರೋದೂ ! .... ಹೌದು, “ ಶುಕ್ರವಾರ ದೇವರ ಸೇವೆ ಮುಗಿಯುತ್ತೆ ; ಶನಿವಾರ ಬೆಳಗ್ಗೆ ಕಾರ್ ಕಳಿಸಿ, ವಾಪಸ್ ಬರೋವಕ್ಕೆ ” ಅಂತ ಹೇಳಿದ್ಲು. ಹೆಂಗಸರು, ಹುಡುಗರು, ಕಾದಿರ್ತಾರೆ ಪಾಪ, ದೇವರ ಬೆಟ್ಟ ದಲ್ಲಿ ! ಮೊದಲು ಅಲ್ಲೀಗೆ ಕಾರ್ ಕಳಿಸಿಬಿಡಬೇಕು .... ಆ ಡ್ರೈವರ್ ಗೋಪಾಲ್ ಇನ್ನೂ ಎಷ್ಟೊತ್ತಿಗೆ ಬರ್ತಾನೋ ಏನೋ ! .... [ (ಇ) ಕಡೆ ನೋಡಿ, ] .... ಯಾರು ? ಓ, ಗೋಪಾಲ್ ! ಬಂದ್ಯಾ ? ....

[ (ಇ) ಬಾಗಿಲ ಬಳಿ ಹೋಗಿ, ಅಲ್ಲಿ ತೆರೆಯಲ್ಲಿ ಗೋಪಾಲ್ ನಿಂತಿರುವಂತೆ ಭಾವಿಸಿ, ]

ಗೋಪಾಲ್, ಹೊತ್ತಿಗೆ ಸರಿಯಾಗಿ ಬಂದ್ಯಲ್ಲ .... ಕಾರ್ ಸಿದ್ಧವಾಗಿದ್ಯೇ? .... ಆಂ? .... ಮನೇಮುಂದೆ ನಿಲ್ಸಿದೀಯೋ? ಗುಡ್! .... ಸರಿ, ಹಾಗಾದ್ರೆ ನೀನೀಗ್ಲೇ ಕಾರ್ ತಕೊಂಡೂ, ದೇವರ ಬೆಟ್ಟಕ್ಹೋಗೀ ಮನೇವ್ರನ್ನೆಲ್ಲಾ ಕರಕೊಂಡ್ಬಂದ್ಬಿಡು. ಕಾರ್ ಕಳಿಸ್ತೀನೀಂತ ಹೇಳಿದ್ದೆ; ರಾಮು ಕಾದಿರ್ತಾನೆ ಪಾಪ! ಏನ್ಮಹಾ, ಮೂವತ್ತೆರಡು ಮೈಲಿ ಹೋಗೋದು, ಮೂವತ್ತೆರಡು ಮೈಲಿ ಬರೋದು. ಈಗ ಹೊರಟರೆ ಇನ್ನೆರಡು ಮೂರು ಘಂಟೇ ಒಳಗಾಗಿ ವಾಪ್ಸು ಬಂದುಬಿಡಬಹುದು. ಕಾರ್ ಸ್ಪೀಡ್ ಮೇಲೇ ಹೋಗ್ಲಿ .... ಆಂ? .... ಊಂ, ಬೆಟ್ಟದ್ಮೇಲಕ್ಕೇ ತಕೊಂಡ್ಹೋಗಿಬಿಡು ಕಾರು — ಹ್ಯಾಗಿದ್ರೂ ರಸ್ತೆ ಮಾಡಿದಾರಲ್ಲ ಬೆಟ್ಟದ್ಮೇಲಕ್ಕೆ! ಇದೂ ಅಲ್ದೇ, ಸಾಮಾನೆಲ್ಲ ತಕೊಂಡು ಬೆಟ್ಟ ಇಳಿಯೋದು ಅವರ ಕೈಲಾಗೋದಿಲ್ಲ .... ಈಗ್ಲೇ ಹೊರಟುಬಿಡು; ನೀ ಬಂದ್ಮೇಲೆ ಇನ್ನೂ ಭಾಳಾ ಕೆಲಸ ಇದೆ ಇಲ್ಲಿ.

[ (ಲ) ಎಂಬಲ್ಲಿಗೆ ಬಂದು, ]

[ **ಯೋಚಿಸಿ, ತನ್ನಲ್ಲಿ :** ] ... ಅಥವಾ ಈ ಹೊತ್ತು ಕೋರ್ಟ್‌ನಲ್ಲಿ ಅಂಥಾ ಮುಖ್ಯವಾದ ಕೇಸುಗಳ್ಯಾವೂ ಇಲ್ವೇ ಇದ್ರೆ ನಾನೇ ಹೋಗಿ ಬಂದ್ರೂ ಹೋಗಿ ಬರಬಹುದು ದೇವರ ಬೆಟ್ಟಕ್ಕೆ-ಬೆಟ್ಟದ್ಮೇಲೆ ದೇವರದರ್ಶನ ಮಾಡಿಕೊಂಡು, ಮನೇವ್ರನ್ನೆಲ್ಲಾ ಕರಕೊಂಡು ಬಂದ್ಹಾಗಾಗುತ್ತೆ .... ಕೇಸುಗಳ್ಯಾವ್ಯಾವ್ವೋ ನೋಡೋಣ ಡಯರೀಲಿ.

[ ಡಯರಿಯನ್ನು ತೆರೆದು ನೋಡುತ್ತ, ]

ಈ ವೂರು ಕೋರ್ಟ್‌ನಲ್ಲಿ ಏನೂ ಇಲ್ಲಾ .... ಆದ್ರೆ .... [ಇನ್ನೊಂದು ಪಂಕ್ತಿ ನೋಡಿ,] ಓಹೋ, ಯಿಲ್ದೂರ್ ಕೋರ್ಟ್‌ನಲ್ಲಿ ಕ್ರಿಮಿನಲ್ ಕೇಸಿದೆ! ಸೆಕ್ಷನ್ ಮುನ್ನೂರಾ ಎರಡು !! ಹಾಗಾದ್ರೆ ಯಿಲ್ದೂರಿಗ್ಹೊರಟ್ಹೋಗ್ಬೇಕೀಗಾ ! ಕಕ್ಷಿಗಾರ್ರು ಬಂದಿರ್ತಾರೆ; ಹೋಗದೇ ಇದ್ರೆ ಹ್ಯಾಗೆ? .... ಆದರೆ ಕಾರ್ ದೇವರ ಬೆಟ್ಟಕ್ಕಳಿಸಿಬಿಟ್ರೆ ನಾನು ಯಿಲ್ದೂರ್‌ಗ್ಹೋಗೋಧ್ಯಾಗೆ? .... [ (ಇ) ಬಳಿಗೆ ಹೋಗಿ, ] ಗೋಪಾಲ್, ........ ಗೋಪಾಲ್, ........ ಹೋಗೇ ಬಿಟ್ಟ ಅವನು! ........[ ಈಚೆ ಬಂದು, ] ಹಾಗಾದ್ರೆ ಯಿಲ್ದೂರಿಗ ರೈಲ್‌ನಲ್ಲೇ ಹೋಗಬೇಕಾಯ್ತು ! .... ರೈಲ್ ಎಷ್ಟೊತ್ತಿಗ್ಹೊರಡುತ್ತೋ ಯಿಲ್ದೂರಿಗೆ ! .... ಇಲ್ಲೆಲ್ಲೋ ರೈಲ್ವೇ ಗೈಡ್ ಇತ್ತಲ್ಲಾ .... ಇಲ್ಲೇ ಇದೆಯಲ್ಲ ....

[ (ಕ) ಕುರ್ಚಿಯಲ್ಲಿ ಕುಳಿತು ರೈಲ್ವೇಗೈಡ್ ತೆರೆದು ಓದುವನು : ]

"ಯಿದ್ದೂರ್—ಯಿಲ್ದೂರ್ ಸೆಕ್ಷನ್ .... ಬ್ರಾಡ್ ಗೇಜ್.... ಮೆಯಿಲ್‌ಟ್ರೆಯಿನ್.... ಸಾಯಂಕಾಲ ಏಳು ಘಂಟೇ...."

ಆದರೆ ಪ್ರಾತಃಕಾಲ ಹೊರಡೋ ಟ್ರೆಯಿನ್ ಎಲ್ಲೀ? .... ಈಚೇ ಪುಟದಲ್ಲಿದೆಯಲ್ಲ ! .... [ ಓದುವನು : ]

"ಪ್ರಾತಃಕಾಲದ ಎಕ್ಸ್‌ಪ್ರೆಸ್ ........ ಯಿದ್ದೂರ್‌ನಿಂದ ಹೊರಡೋದು ಪ್ರಾತಃಕಾಲ ಏಳುಘಂಟೆಗೆ.... ಯಿಲ್ದೂರ್ ಸೇರೋದು ಹತ್ತೂ — ನಲವತ್ತಕ್ಕೆ .... "

[ ಗೈಡ್ ಮುಚ್ಚಿಟ್ಟು, ]

ಸರಿ ಹಾಗಾದ್ರೆ, ಕೋರ್ಟ್ ವೇಳೆಗ್ಹೋಗುತ್ತೆ ರೈಲು ಯಿಲ್ಹೊರಿಗೆ .... [ ಗಡಿಯಾರ ನೋಡಿ, ] ಓ, ಆರೂ ಕಾಲಾಗ್ತಾ ಬಂತು; ಇನ್ನು ಮುಕ್ಕಾಲು ಘಂಟೇ ಒಳಗಾಗಿ ನಾನು ರೈಲ್‌ನಲ್ಲಿರ ಬೇಕು ! ಜಾಗ್ ಜಾಗ್ರತೆ ಹೊರಟುಬಿಡೋಣ.

[ (ಯ) ಬಳಿ ಇರುವ ಸ್ಯೂಟ್‌ಕೇಸ್ ತಂದು, (ಕ) ಮೇಜಿನ ಮೇಲಿಟ್ಟು, ]

ಇದೊಂದೇ ಸಾಕು ಪ್ರಯಾಣಕ್ಕೆ .... ಹಾಸಿಗೆ ಇನ್ನ್ಯಾತಕ್ಕೆ ? ಸಾಯಂಕಾಲ ವಾಪ್ಸು ಬಂದೇಬರ್ತೇನಲ್ಲ ! .... ಆ ರೈಲ್ವೇ ಗೈಡೂ, ಡಯರಿ, ಎರಡೂ ಇದರಲ್ಲಿ ಹಾಕಿಬಿಡೋಣ ; ಇರಲಿ .... [ ಎರಡನ್ನೂ ಹಾಕಿ, ] .... ಅಂಧಾಗೆ, ಆ ಕೇಸಿಗೆ ಸಂಬಂಧಪಟ್ಟ ಫೈಲುಗಳು ನಮ್ಮ ಚಿಕ್‌ಪೇಟೇ ಆಫೀಸಿನಲ್ಲೇ ಇವೇ ! ........ ನಮ್ಮ ಗುಮಾಸ್ತೆ ಅಚ್ಚಪ್ಪ್ನೋರು ಇನ್ನೂ ಬಂದಿದಾರೋ ಇಲ್ವೋ, ಚಿಕ್‌ಪೇಟೇ ಆಫೀಸಿಗೆ ಇಷ್ಟೊತ್ತಿಗಾಗ್಺ೆ ! .... ಹೇಳಿದ್ದೆ ನಾನು ; 'ಶನಿವಾರ ಯಿಲ್ಹೊರ್ ಕೇಸಿದೆ, ಜಾಗ್ರತೆ ಬನ್ನಿ ಆಫೀಸಿಗೆ' ಅಂತ ! ಬಂದಿದಾರೇನೋ ನೋಡೋಣ.

[ ಫೋನ್ ಚಕ್ರ ತಿರುಗಿಸಿ, ]

"ಹಲೋ, .... ಹೆಲೋ, .... ಚಿಕ್‌ಪೇಟೇ ಆಫೀಸೋ ? .... ಅಚ್ಚಪ್ನೋರು ತಾನೇ ? .... ನಾನು, ಮನೇಯಿಂದ ಮಾತಾಡ್ತಾ ಇರೋದೂ .... ಆ, ಅಚ್ಚಪ್ನೋರೇ, ಈಗ ನೀವೂ, ಆ

ಯಿಲ್ಲೂರ್ ಕ್ರಿಮಿನಲ್ ಕೇಸಿನ ಫೈಲುಗಳೆಲ್ಲಾ ತಕೊಂಡೂ, ಬೇಗ ರೈಲ್ವೇ ಸ್ಟೇಷನ್ನಿಗ್ಹೋಗೀ, ಸೆಕೆಂಡ್ ಕ್ಲಾಸ್ ಸೀಟ್ ರಿಸರ್ವ್ ಮಾಡ್ಸಿರೀ; ನಾನು ಜಟಕಾದಲ್ಲಿ ಬರ್ತೀನಿ ಸ್ಟೇಷನ್ನಿಗೆ ಇಲ್ಲಿಂದ್ಲೇ .... ಆಂ? .... ಊಂ, ಹೋಗಬೇಕೀಗಾ, ಮುಖ್ಯವಾದ ಕೇಸಲ್ವೇ? ರೈಲ್‌ನಲ್ಲೇ ಹೋಗಬೇಕು— ಕಾರ್ ದೇವರಬೆಟ್ಟಕ್ಹೋಗಿದೆ....ಆಂ? .... ಅದೆಲ್ಲಾ ಆಮೇಲೆ ರೈಲ್‌ನಲ್ಲಿ ಕೂತುಕೊಂಡೂ, ನಿಧಾನ್ವಾಗಿ ಮಾತಾಡೋಣ. ಈಗ ಹೊತ್ತಿಲ್ಲ .... ಅಂಥಾಗೆ ನೀವು ಸ್ಟೇಷನ್ನಿಗ್ಹೋಗ್ತಾ ದಾರೀಲೀ, ಒಂದು ಟೆಲಿಗ್ರಾಂ ಕಳಿಸಿಬಿಡಿ, ಆ ಯಿಲ್ಲೂರ್ ಅಡ್ವೊಕೇಟ್ ಕೋದಂಡ್ರಾಯರಿಗೆ; 'ಹೊರಟಿದೇವೆ; ರೈಲ್ವೇ ಸ್ಟೇಷನ್ನಿಗೆ ಕಾರ್ ಕಳಿಸಿ' ಅಂತ, ಟೆಲಿಗ್ರಾಂ .... ಯಿಲ್ಲೂರಲ್ಲಿ ನಾವು ಇಳಿಯುತ್ಲೂ ಸ್ಟೇಷನ್ನಿಗೆ ಕಾರ್ ಬಂದಿದೆ. ಮೇಲಲ್ವೇ? .... ಆಂ? .... ಅಲ್ಲಿ ಮೇಜಿನ ಡ್ರಾಯರ್ ನಲ್ಲಿರೋ ದುಡ್ಡೇ ಬಳಸ್ಕೊಂಡಿರಿ ಸಧ್ಯಕ್ಕೆ — ಆಮೇಲೆ ನೋಡ್ಕೊಳ್ಳೋಣ."

[ **ಸೂಟ್‌ಕೇಸ್ ಸಮೇತ (೪) ಬಾಗಿಲ ಬಳಿಗೆ ಹೋಗಿ,** ] ಲೋ, ಹುಡುಗಾ, .... ಸ್ವಿಚ್ ಹಾಕಿದ್ಯಾ ಹಂಡೇಗೇ? .... ಸರಿ. ಈಗಾ, ಈ ಪೆಟ್ಟಿಗೇ ತಕೊಂಡೂ, ನೀನು ರೈಲ್ವೇ ಸ್ಟೇಷನ್ನಿಗ್ಹೋಗು. ಹೋಗೀ, ಅಲ್ಲಿ ಪೆಟ್ಟಿಗೆ ಇಟ್ಕೊಂಡು ಕೂತಿರು, ಅಚ್ಚಪ್ನೋರು ಬರ್ತಾರೆ. ಆಮೇಲೆ ನಾನೂ ಬರ್ತೀನಿ ಸ್ನಾನಾಮಾಡಿಕೊಂಡು. ತಕೋ [ **ಪೆಟ್ಟಿಗೆ ಕೊಟ್ಟು** ] ಓಡು.

[ ಈಚೆ ಬಂದು ]

ಇಲ್ಲೀಗೆ ಕೆಲಸಗಳೆಲ್ಲಾ ಸಾಂಗ್ವಾಗಾಧಾಗಾದ್ವು. ಇನ್ನು ಹೋಗಿ ಸ್ನಾನಮಾಡಿಕೊಂಡು ಬರೋಣ—ನೀರೆಷ್ಟು ಕಾದಿದ್ರೆ ಅಷ್ಟೇ ಆಯ್ತು.

[ (ಯು) ಬಳಿಗೆ ಹೋಗಿ, ಒಂದು ಟವಲು ಭುಜದಮೇಲೆ ಹಾಕಿಕೊಂಡು, ಇನ್ನೊಂದು ಟವಲು ಕೈಯಲ್ಲಿ ಹಿಡಿದು, ಟೂತ್ ಪೇಸ್ಟ್, ಟೂತ್ ಬ್ರಷ್, ಸೋಪ್ ಬಾಕ್ಸ್ ತೆಗೆದುಕೊಂಡು, (ಅ) ಬಾಗಿಲಕಡೆ ಹೋಗುತ್ತ, ಅಕಸ್ಮಾತ್ತಾಗಿ (ಉ) ಕಿಟಕಿಯಲ್ಲಿ ನೋಡಿ, ಆಶ್ಚರ್ಯದಿಂದ, ]

ಇದೇನು ! ಈ ಕಿಟಿಕೀಲಿ ಈ ಹೊತ್ತು ಹೀಗೇ !! ಸೂರ್ಯ ಈಚೇಕಡೆ ಹುಟ್ಟಿದಾನಲ್ಲಾ ! .... ಇದು ಪಶ್ಚಿಮ ಅಲ್ವೇ ? ಹೌದು, ಅದು ಪೂರ್ವ, ಇದು ಪಶ್ಚಿಮ—ಪಶ್ಚಿಮಕ್ಕೇ ನಾನು ಕಿಟಕಿ ಇಡಿಸಿರೋದು .... ಹಾಗಾದ್ರೆ, ಇದು ಹುಟ್ಟೋ ಸೂರ್ಯ ಅಲ್ಲ, ಮುಳುಗೋ ಸೂರ್ಯ ! ಹಾಗಾದ್ರೆ ಇದು ಶನಿವಾರ ಪ್ರಾತಃಕಾಲ ಅಲ್ಲ, ಶುಕ್ರವಾರ ಸಾಯಂಕಾಲ !....

[ ಅಕ್ಷತೆ ಮುಟ್ಟಿ ನೋಡಿಕೊಂಡು, ಹುಬ್ಬು ಮೇಲಕ್ಕೆತ್ತಿ ಇಳಿಸಿ, ]

ಹೌದು, ಹೌದು, ಮಧ್ಯಾಹ್ನ ಊಟಮಾಡಿ ಮಲಗಿದೋನಲ್ವೇ ನಾನೂ ! .... [ ಸ್ವಲ್ಪ ಹೊತ್ತು ಕಣ್ಣು ಮಿಟುಕಿಸುತ್ತ ನಿಂತು ] .... ಆರರೆ, ಮೊದಲು ಅಚ್ಚಪ್ಪೋರಿಗೆ ಫೋನ್ ಮಾಡೋಣ— ಟಿಕೆಟ್ ತಕೊಂಡು ಬಿಟ್ಟಾರು !

[ ಎನ್ನುತ್ತ ಬೇಗ ಬೇಗ ಫೋನ್ ಬಳಿಗೆ ಹೋಗಿ, ಟೂತ್ ಪೇಸ್ಟ್ ವಗೈರೆ ಫೋನ್ ಬಳಿ ಇಟ್ಟು, ಬೇಗ ಬೇಗ ಫೋನ್ ಚಕ್ರ ತಿರುಗಿಸಿ, ]

" ಹಲೋ, ಹಲೋ .... [ಇನ್ನು ಸ್ವಲ್ಪ ಗಟ್ಟಿಯಾಗಿ]
ಹೆಲೋ .... ಆಂ? ಬಂದಿರೋ? ಅಲ್ಲ ಇಷ್ಟೊತ್ತೇನ್ರೀ ಫೋನ್ ಹತ್ರ ಬರೋದಕ್ಕೇ? ಚನ್ನಾಯ್ತು ಏನಾದ್ರೂ ಆಗ್ಲಿ .... ಆಂ? ಏನ್ರೀ ಅದೂ? .... ...
[ಇದ್ದಕ್ಕಿದ್ದಂತೆ ಕಣ್ಣರಳಿಸಿ, ಕೈ ನಡುಗಿಸುತ್ತ ದಿಗ್ಭ್ರಮೆಯಿಂದ,] .... ಏ ನೂ ! ಶ್ರೀರಾಮಯ್ಯನೋರ ಮನೇನೇ!!

[ಫೋನ್ ಮೇಲೆ ಕೈಮುಚ್ಚಿ]

ಅವಸರದಲ್ಲಿ ಯಾವುದೋ ನಂಬರ್ ತಿರುಗಿಸಿಬಿಟ್ಟೆನಲ್ಲಾ! ಏನ್ಮಾಡೋದೀಗಾ? .... ಚಿಂತೆಯಿಲ್ಲ ....

[ಫೋನ್‌ನಲ್ಲಿ]

" ನಮಸ್ಕಾರ ಶ್ರೀರಾಮಯ್ಯನೋರೇ, .... ಆಂ? ಯಜಮಾನ್ರು ಮನೇಲಿಲ್ವೇ! .... ಆಂ, ಊಂ, ಯಾರೂ ಅಲ್ಲಾಮ್ಮಾ, ನಾನೇ."

ಹುಶ್ !! .... [ಫೋನ್ ಕೆಳಗಿಟ್ಟು, (ಚ) ಕುರ್ಚಿಯಲ್ಲಿ ಕುಳಿತು, ಕರವಸ್ತ್ರದಿಂದ ಗಾಳಿ ಸೋವಿಕೊಳ್ಳುವನು.]

[ಮತ್ತೆ ಫೋನ್ ಹಿಡಿದು,]

ಒಂದೂ, ಎರಡೂ, ಮೂರೂ, ನಾಲ್ಕೂ, ಐದು [ಎಂದು ಹೇಳುತ್ತ ಎಚ್ಚರದಿಂದ ಚಕ್ರ ತಿರುಗಿಸಿ,]

" ಹಲೋ, .... ಹಲೋ, .... ಹೆಲ್ಲೋ .... "

[ ಫೋನ್ ಕೆಳಗಿಟ್ಟು ]

ಹೊರಟ್ಹೋಗಿದಾರೆ ಅಚ್ಚಪ್ನೋರು ಸ್ಟೇಷನ್ನಿಗೆ! ಟಿಕೆಟ್ ತಕೊಂಡೇ ಬಿಟ್ರೋ ಏನೋ! .... ಹುಂ, ಚಿಂತೆಯಿಲ್ಲ. ಒಂದ್ವೇಳೆ ಟಿಕೆಟ್ ತಕೊಂಡಿದ್ರೆ, ಅದನ್ನ ನಾಳೆ ಬೆಳಗಿನ— ರೈಲಿಗೆ ಬದಲಾಯಿಸಿಕೊಂಡ್ರಾಯ್ತು—ಒಂದು ರೂಪಾಯಿ ತಾನೆ ಹೆಚ್ಚಿಗೆ ಕೊಡಬೇಕಾಗೋದು! .... ಆದರೆ ಈಗ ಯಿಲ್ಡ್ರೊರ್ ಸ್ಟೇಷನ್ನಿಗೆ ಕೋದಂಡ್ರಾಯ್ರು ಕಾರ್ ಕಳಿಸ್ತಾರೋ ಏನೋ! .... ಆಗ್ಹೋಯ್ತಲ್ಲ—ಟೆಲಿಗ್ರಾಂ ಹೋಗಿರುತ್ತೆ ಇಷ್ಹೊತ್ತಿಗೆ, ಏನ್ಮಾಡೋದು? .... ಕಾರೂ .... ಅರ್ಧದಾರಿ ಹೋಗಿರುತ್ತೆ ದೇವರಬೆಟ್ಟದ ರಸ್ತೇಲಿ. .... ಒಳ್ಳೇದಾಯ್ತು— ನಾಳೆ ಬೆಳಗ್ಗೆ ಕಳಿಸೋ ಕಾರು ಈಗಲೇ ಕಳಿಸಿಧಾಗಾಯ್ತು. ಅಷ್ಟೇ ತಾನೇ?

[ (ಅ) ಬಾಗಿಲ ಕಡೆ ನೋಡಿ, ]

ಯಾರು? ಓಹೋ, ಪೋಸ್ಟ್ ಬಂತೋ [ ಎಂದು (ಅ) ಬಾಗಿಲ ಬಳಿ ಹೋಗಿ ಎರಡು ಪೋಸ್ಟ್ ಕಾರ್ಡ್ ತಂದು ಓದುವನು : ]

ದೇವರಬೆಟ್ಟದಿಂದ

"ಶ್ರೀ|| ತಂದೆಯವರ ಚರಣಸನ್ನಿಧಿಯಲ್ಲಿ, ಬಾಲಕ ರಾಮು ಮಾಡುವ ಸಾಷ್ಟಾಂಗ ನಮಸ್ಕಾರಗಳು

ಉಭಯ ಕುಶಲ

ಇಲ್ಲಿ ದೇವರ ಸೇವೆ ಇನ್ನೂ ಮೂರು ದಿನ ನಡೆಯ ಬೇಕಾಗಿರುವುದರಿಂದ, ನಾವು ಇಲ್ಲಿಂದ ಮಂಗಳವಾ

ಹೊರಟು ಅಲ್ಲಿಗೆ ಬರುತ್ತೇವೆ. ಕಾರ್ ಶನಿವಾರ ಕಳಿಸಬೇಕಾದ್ದಿಲ್ಲಾ—ಮಂಗಳವಾರ ಕಳಿಸಿ.

ಅಲ್ಲದೆ ನೀವು ಭಾನುವಾರವಾದರೂ ಪುರಸತ್ತು ಮಾಡಿಕೊಂಡು ದೇವರ ಸೇವೆಗೆ ಇಲ್ಲಿಗೆ ಬರಬೇಕೆಂದು ಮಾತೃಶ್ರೀಯವರು ಹೇಳುತ್ತಾರೆ.

ಇಂತು
ಶಿರಸಾಷ್ಟಾಂಗ ನಮಸ್ಕಾರಗಳು
ರಾಮು.

ವೃಥಾ ಕಾರ್ ಕಳಿಸಿಧಾಗಾಯ್ತಲ್ಲಾ ! ಈ ಗೋಪಾಲ್ ಅವರನ್ನೆಲ್ಲ ಹೊರಡಿಸಿಕೊಂಡು ಬಂದೇಬಿಡ್ತಾನೋ ಏನೋ ಈ ರಾತ್ರಿ !! ಹುಂ ! .... ಈ ಕಾರ್ಡ್ ಎಲ್ಲಿಂದ ಬಂದಿದ್ಯೋ ನೋಡೋಣ. [ ಓದುವನು : ]

" ಕೋದಂಡರಾವ್, ಬಿ. ಎ., ಬಿ. ಎಲ್., ಯಿಲ್ದೂರ್ ಅಡ್ವೊಕೇಟ್.

ಮಿತ್ರರೇ,—ನಾಳೆ, ಅಂದರೆ ಇಪ್ಪತ್ನಾಲಕ್ನೇ ಶನಿವಾರ, ಇಲ್ಲಿ ಮ್ಯಾಜಿಸ್ಟ್ರೇಟರ ಮನೇಲಿ ಮದುವೆ ಪ್ರಯುಕ್ತ ನಾಳೆ ನಡೆಯಬೇಕಾಗಿದ್ದ ಕೇಸುಗಳೆಲ್ಲಾ ಅಡ್ಜರ್ನ್ ಆಗಿವೆ. ಅಡ್ಜರ್ನ್ ತಾರೀಖು ಮುಂದೆ ತಿಳಿಸುತ್ತೇನೆ. ಅಂತು ನಾಳೆ ನೀವು ಇಲ್ಲಿಗೆ ಬರಬೇಕಾದ್ದಿಲ್ಲಾ.

ತಮ್ಮ ವಿಶ್ವಾಸಿ
ಕೋದಂಡರಾವ್ "

ಚನ್ನಾಯ್ತು! ಒಂದು ಮಾಡಿದರೆ ಇನ್ನೊಂದಾಗುತ್ತಲ್ಲಾ! ಆ ಟಿಕೆಟ್ ನಾಳೆ ಬೆಳಗಿನ ರೈಲಿಗೂ ಬೇಕಾಗೋದಿಲ್ಲ! .... ಅಥವಾ ಅಚ್ಚಪ್ನೋರಿನ್ನೂ ಟಿಕೆಟ್ ತಕೊಂಡೇ ಇಲ್ವೇ! .... ಇಲ್ಲೇ ಯೋಚನೆ ಮಾಡೋದಕ್ಕಿಂತ. ನಾನೇ ರೈಲ್ವೇ ಸ್ಟೇಷ ನ್ನಿಗ್ಹೋಗಿ ಬರೋದು ಮೇಲು, ಹ್ಯಾಗಾದ್ರೂ ಆಗ್ಲಿ, [ಗಡಿಯಾರ ನೋಡಿ] ಇನ್ನೂ ಅರ್ಧಘಂಟೆ ಇದೆ .... ಅಂತು ಎದ್ದೇ ಇದೇ ನಲ್ವೆ ನಾನೂ? ....ಹೌದು, ಥರ್ಮೋ ಫ್ಲಾಸ್ಕಿನಲ್ಲಿ ಮಧ್ಯಾಹ್ನ ಕಾಫೀ ತರಿಸಿಟ್ಟಿದ್ದು ಹಾಗೇ ಇದೆಯಲ್ಲ! [ಬೇಗ ಕಾಫೀ ಕುಡಿದು] ಎದ್ದಿದೀನಿ, ಅನುಮಾನ ಏನೂ ಇಲ್ಲ.

[ ಲಾಂಗ್ ಕೋಟ್ ಧರಿಸುತ್ತ, ]

ಈ ಗಡಿಯಾರಗಳಿಂದ .... ಘಂಟೇ ಸಂಖ್ಯೆ ಗೊತ್ತಾಗುತ್ತೇ ಹೊರತು, ಹಗಲೇ ರಾತ್ರೀನೇ, ಪ್ರಾತಃಕಾಲವೇ, ಸಾಯಂ ಕಾಲವೇ ಅನ್ನೋದೇ ಗೊತ್ತಾಗೋದಿಲ್ಲಾ! .... [ತಾರೀಖು ಪಟ್ಟಿ ಕಡೆ ನೋಡಿ, ] ಈ ತಾರೀಖು ಪಟ್ಟಿಗಳೂ ಅಷ್ಟೆ—ಇವು ಗಳಲ್ಲಿ ವಾರಕ್ಕೂ ತಾರೀಖಿಗೂ ಲಗತ್ ಮಾಡಿರ್ತಾನೆ; ಆ ಪೈಕಿ ಯಾವುದಾದರೂ ಒಂದು ತಪ್ಪಿದರೆ ಇನ್ನೊಂದೂ ತಪ್ಪಿ ಬಿಡುತ್ತೆ! .... [ಗುಂಡಿಗಳನ್ನು ಹಾಕಿಕೊಳ್ಳುತ್ತ] ಶುಕ್ರವಾರ ಸಾಯಂಕಾಲಾನ ಶನಿವಾರ ಪ್ರಾತಃಕಾಲಾಂತ ತಿಳುಕೊಂಡು ಬಿಟ್ಟೆ! ಅದಕ್ಕೇ ಅಚ್ಚಪ್ನೋರು "ಈಗ್ಲೇ ಹೊರಡ್ತೀರಾ, ಈಗ್ಲೇ ಹೊರಡ್ತೀರಾ?" ಅಂತ ಅಷ್ಟು ಸಲ ಕೇಳಿದ್ದು ಫೋನ್ ನಲ್ಲಿ! .... ಅದಕ್ಕೇ ಆ ಹುಡುಗ ಹಂಡೇದಲ್ಲಿ ನೀರು ಕಾಯ್ಸೋ ದಕ್ಕೆ ಗೊಣಗಿದ್ದು! .... ಛೇ ಛೇ ಛೇ, ಏನೇನೋ ನಡೆಸಿ

ಬಿಟ್ಟೇನಲ್ಲಾ ಕಾರ್ಯ ಸಾಂಗವಾಗೀ! .... [ ರುಮಾಲು ಕೈಯಲ್ಲಿಡಿದುಕೊಂಡು, ] ಇನ್ಮೇಲೆ ನಿದ್ರೆಯಿಂದ ಏಳುತ್ಲೂ, ಮೊದಲು ಒಂದ್ಸಲ ಕಿಟಕೀಲಿ ನೋಡೋದೆಳ್ಳೋದು. ಹಾಗಂತ ಒಂದು ಬೋರ್ಡ್ ಬರೆಸೀ, ಈ ಮಂಚಕ್ಕೆಗಲ್ಹಾಕ ಬೇಕು ಬೋರ್ಡ್ ನಾಳೇನೇ ಬರೆಸಿಬಿಡಬೇಕು—"ಕಿಟಕೀಲಿ ನೋಡು" ಅಂತ ದಪ್ಪಕ್ಷರಗಳಲ್ಲಿ! .... ಈಗ ರೈಲ್ವೇ ಸ್ಟೇಷನ್ನಿಗ್ಹೋಗಿ ಬರೋಣ ಮೊದಲು.

[ ಎಂದು ರುಮಾಲು ಹಿಂದುಮುಂದಾಗಿ ಧರಿಸಿ, ವಾಕಿಂಗ್ ಸ್ಟಿಕ್, ಜೋಡು, ಸಮೇತ ಜಬರ್ನಿಂದ ಹೋಗುತ್ತಿರುವನು (ಅ). ]

## [ ತೆರೆ ಬೀಳುವುದು ]

### — ಸಂಪೂರ್ಣ —

---

ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ

# ಕ್ಷೀರಸಾಗರರ ಗ್ರಂಥಗಳು

---

| | | | | |
|---|---|---|---|---|
| ಕಾಮಣ್ಣನ ಸಾಹಸ (ನಾಟಕ) | | ೦ | ೧೦ | ೦ |
| ನಿಶ್ಚಿತಾರ್ಥ | ,, | ೦ | ೧೨ | ೦ |
| ನಿತ್ಯನಾಟಕ | ,, | ೦ | ೮ | ೦ |
| ದೀಪಾವಳಿ | ,, | ೦ | ೧೨ | ೦ |
| ನಮ್ಮೂರಿನ ಪಶ್ಚಿಮಕ್ಕೆ | ,, | ೦ | ೬ | ೦ |
| ಏಕಪಾತ್ರಾಭಿನಯಗಳು : ಮಲ್ಲಿಗೇ ಚಪ್ಪರ, ಲಾಯರ ಪ್ರಯಾಣ | (ನಾಟಕ) | ೦ | ೬ | ೦ |
| ನೆಪೋಲಿಯನ್ ಬೋನಪಾರ್ಟೆ (ಜೀವನ ಚರಿತ್ರೆ) | | ೧ | ೦ | ೦ |
| ಸಂಗೀತ ಸಾಮ್ರಾಜ್ಯ (ನಾಟಕ) : | ಅಚ್ಚಿನಲ್ಲಿದೆ | | | |
| ಚಪ್ಪಾಳೇ ವೈದ್ಯ | ,, ,, | | | |
| ಮೊಮ್ಮಗನ ಮಾಡದಿ | ,, ,, | | | |
| ವೀಳ್ಯ (ಕಥಾಸಂಗ್ರಹ) | ,, | | | |

ಸತ್ಯ ಪುಸ್ತಕ ಭಂಡಾರ,

ಬೆಂಗಳೂರು ನಗರ.